ಲಿಖಿತ ಮೂಲಕ ಉತ್ತರಿಸುವ
ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು
ನೂರ ನಲವತ್ತಮೂರನೆಯ ಅಧಿವೇಶನ
ಸೋಮವಾರ, ದಿನಾಂಕ : 01 ನೇ ಫೆಬ್ರುವರಿ, 2021

ರಾಜ್ಯದ ಸಮಾಜ ಕಲ್ಯಾಣ ಇಲಾಖೆಯಡಿಯಲ್ಲಿನ ಹಾಸ್ಟೆಲ್‌ಗಳ ಸ್ಥಿತಿಗತಿ ಕುರಿತು

ಶ್ರೀ ಪಿ.ಆರ್. ರಮೇಶ್ (ನಾಮನಿರ್ದೇಶನ ಹೊಂದಿದವರು) :-

119 (179) ಮಾನ್ಯ ಸಮಾಜ ಕಲ್ಯಾಣ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ರಾಜ್ಯದಲ್ಲಿ ಸಮಾಜ ಕಲ್ಯಾಣ ಇಲಾಖೆ ವತಿಯಿಂದ ಒಟ್ಟು ಎಷ್ಟು ವಿದ್ಯಾರ್ಥಿ ವಸತಿ ನಿಲಯಗಳು (ಹಾಸ್ಟೆಲ್‌ಗಳು) ಅಸ್ತಿತ್ವದಲ್ಲಿವೆ; (ಜಿಲ್ಲಾವಾರು/ತಾಲ್ಲೂಕುವಾರು ಮಾಹಿತಿ ನೀಡುವುದು)

(ಆ) ಈ ವಸತಿ ನಿಲಯಗಳಲ್ಲಿ ಮೂಲಭೂತ ಸೌಕರ್ಯಗಳಾದ ಶೌಚಾಲಯ, ಶುದ್ಧ ಕುಡಿಯುವ ನೀರು, ಬೆಡ್‌ಗಳ ಕೊರತೆ ಮತ್ತು ಶುಚಿಯಾದ ಕೋಣೆಗಳ ವ್ಯವಸ್ಥೆ ಇಲ್ಲದೇ ಇರುವ ಕುರಿತು ಒಟ್ಟು ಎಷ್ಟು ದೂರುಗಳು ಸಲ್ಲಿಕೆಯಾಗಿವೆ; ಮತ್ತು ಎಷ್ಟು ದೂರುಗಳಿಗೆ ಸರ್ಕಾರದಿಂದ ಸೂಕ್ತ ಕ್ರಮ ಜರುಗಿಸಲಾಗಿದೆ;

(ಇ) ಈ ವಸತಿ ನಿಲಯಗಳಲ್ಲಿರುವ ಪ್ರತಿ ವಿದ್ಯಾರ್ಥಿಗೆ ಎಷ್ಟು ಪ್ರಮಾಣದ ಪೌಷ್ಟಿಕಾಂಶಗಳ ಆಹಾರವನ್ನು ನೀಡಲು ನಿಯಮ ರೂಪಿಸಲಾಗಿದೆ; ದೈನಂದಿನವಾಗಿ ಈ ನಿಯಮಗಳ ಪಾಲನೆ ಪರೀಶಿಲಿಸಲು ಯಾವುದಾದರೂ ವ್ಯವಸ್ಥೆ ಜಾರಿಯಲ್ಲಿದೆಯೇ; (ವಿವರ ನೀಡುವುದು)

(ಈ) ಸದರಿ ಹಲವು ವಸತಿ ನಿಲಯಗಳಲ್ಲಿ ಸೂಕ್ತ ಗ್ರಂಥಾಲಯಗಳು ಇಲ್ಲದೇ ಇರುವುದು, ಮತ್ತು ಇರುವ ಗ್ರಂಥಾಲಯಗಳ ಸಮರ್ಪಕ ನಿರ್ವಹಣೆ ಆಗದೇ ಇರುವ ವಿಷಯ ಸರ್ಕಾರದ ಗಮನಕ್ಕೆ ಬಂದಿದೆಯೇ ; ಬಂದಿದ್ದಲ್ಲಿ, ಸರ್ಕಾರದ ಕ್ರಮವೇನು ? (ವಿವರ ನೀಡುವುದು)